13. ಪ.ಜಾತಿ : ಪ.ವರ್ಗದವರಿಗೆ ಮೀಸಲಾಗಿರುವ ಶೇಕಡಾ 18 ಮತ್ತು ಶೇಕಡಾ 22.5 ಅನುದಾನದ ಮೇಲ್ವಿಚಾರಣೆ.
14. ಪ.ಜಾತಿ:ಪ.ವರ್ಗದವರ ಮೇಲೆ ದೌರ್ಜನ್ಯ ನಡೆದಲ್ಲಿ ಸ್ಥಳಕ್ಕೆ ಭೇಟಿ ನೀಡಿ ಪರಿಹಾರ ಕಾರ್ಯ ಕೈಗೊಳ್ಳುವುದು.
15. ಸ್ಥಳೀಯ ಸಂಸ್ಥೆಗಳಲ್ಲಿ ಪ.ಜಾತಿ :ಪ್ರವರ್ಗಗಳ ನೇಮಕಾತಿ, ಮೀಸಲಾತಿ ಬಗ್ಗೆ ಪರಿಶೀಲಿಸಿ ಮತ್ತು ಅವರಿಗೆ ಮೀಸಲಾಗಿರುವ ಅನುದಾನದ ಬಗ್ಗೆ ಪರಿಶೀಲಿಸುವುದು.
16. ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳನ್ನು ಪಾಲಿಸುವುದು.
17. ಪ.ಜಾತಿ:ಪ್ರವರ್ಗದವರು ಜೀತದಾಳುಗಳಾಗಿರುವ ಕುರಿತು ಸರ್ವೆ ಕಾರ್ಯ ಕೈಗೊಳ್ಳುವುದು.
18. ಆಯುಕ್ತರು ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ನೀಡುವ ಇತರೇ ಕೆಲಸಗಳನ್ನು ನಿರ್ವಹಿಸುವುದು.

**ಬಿ. ಕಛೇರಿ ಅಧೀಕ್ಷಕರು-ಹುದ್ದೆ ಖಾಲಿ ಇದೆ.**

ಶ್ರೀ ಅಶೋಕ ಕೆ. ಪವಾರ (ಪ್ರಭಾರ)

(ವೇತನ ಶ್ರೇಣಿ 3850-7050)

ಕಛೇರಿ ಅಧೀಕ್ಷಕರು ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಯವರ ಕಾರ್ಯಾಲಯದ ಸಂಪೂರ್ಣ ಮೇಲುಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಕಛೇರಿಯ ಸಿಬ್ಬಂದಿಗಳ ಮೇಜು ತಪಾಸಣೆ ಮಾಡಿ ಪತ್ರಗಳ ತುರ್ತು ವಿಲೇವಾರಿ ಸಮರ್ಪಕವಾಗಿ ನಡೆಯುವಂತೆ ನೋಡಿಕೊಳ್ಳುವುದು. ದೌರ್ಜನ್ಯ ಪ್ರಕರಣಗಳ ಹಾಗೂ ಅಂತರ್‌ಜಾತಿ ವಿವಾಹವಾದವರಿಗೆ ಪ್ರೋತ್ಸಾಹಧನ ಮಂಜೂರಾತಿ ಯೋಜನೆಗೆ ಸಂಬಂಧಪಟ್ಟ ಇನ್ನಿತರ ಕೆಲಸಕಾರ್ಯಗಳು ಹಾಗೂ ಅಧಿಕಾರಿಗಳು ಹೇಳಿದ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಾರೆ.

**ಸಿ. ಪ್ರಥಮ ದರ್ಜೆ ಸಹಾಯಕರು**

ಶ್ರೀ ಅಶೋಕ ಕೆ. ಪವಾರ

(ವೇತನ ಶ್ರೇಣಿ 3850-7050)

ಪ್ರಥಮ ದರ್ಜೆ ಸಹಾಯಕರು, ಕಛೇರಿ ಕೆಲಸಕ್ಕೆ ಸಂಬಂಧಪಟ್ಟಂತೆ ಪ್ರತ್ಯೇಕವಾಗಿ ಸಿಬ್ಬಂದಿ ಶಾಖೆಯ ಕೆಲಸ ಲೆಕ್ಕ ಪತ್ರ ವಿಭಾಗದ ಕೆಲಸ, ಶಿಕ್ಷಣ ಶಾಖೆಯ ಕೆಲಸ ಹಾಗೂ ಅಧಿಕಾರಿಗಳು ಹೇಳಿದ ಇನ್ನಿತರ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಾರೆ. ಕಛೇರಿ ಕೈಪಿಡಿಯ ಪ್ರಕಾರ ಕಛೇರಿ ಕೆಲಸ ನಿರ್ವಹಿಸುತ್ತಾರೆ.

**ಡಿ. ದ್ವಿತೀಯ ದರ್ಜೆ ಸಹಾಯಕರು**

ಶ್ರೀಮತಿ ವೈಲೆಟ್ ಎಸ್. ಪಿಂಟೋ

(ವೇತನ ಶ್ರೇಣಿ 3000-6300)

ದ್ವಿತೀಯ ದರ್ಜೆ ಸಹಾಯಕರು ಕಛೇರಿ ಕೆಲಸಕ್ಕೆ ಸಂಬಂಧಪಟ್ಟಂತೆ ವಿದ್ಯಾರ್ಥಿ ವೇತನದ ಕೆಲಸ, ಅವಕ ವಹಿ:ಜಾವಕ ವಹಿ ನಿರ್ವಹಣೆ, ಹಾಗೂ ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಮತ್ತು ಕಛೇರಿ ಅಧೀಕ್ಷಕರ ಮಾಸಿಕ ದಿನಚರಿ ನಿರ್ವಹಣೆ ಇನ್ನಿತರೆ ಕೆಲಸ ಕಾರ್ಯಗಳು ಮತ್ತು ಸಾರ್ವಜನಿಕ ದೂರು ಅರ್ಜಿಗಳ ಹಾಗೂ ಕುಂದುಕೊರತೆಗಳ ನಿರ್ವಹಣೆ, ನಿ ಅಧಿಕಾರಿಗಳು ಹೇಳಿದ ಇತರೆ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಾರೆ.

**ಇ. ಬೆರಳಚ್ಚುಗಾರರು-ಹುದ್ದೆ ಖಾಲಿ ಇದೆ.**

ವೇತನ ಶ್ರೇಣಿ (ರೂ.3000-5450)

1. ಕಛೇರಿ ಸಂಬಂಧಿಸಿದ ಎಲ್ಲಾ ಕಾಗದ ಪತ್ರಗಳನ್ನು ಬೆರಳಚ್ಚು ಮಾಡುವುದು.
2. ಕಛೇರಿಗೆ ಸಂಬಂಧಿಸಿದ ಮೇಲಾಧಿಕಾರಿಗಳ ಮುಂಗಡ ಪ್ರವಾಸ ಕಾರ್‍ಯಕ್ರಮಗಳನ್ನು ನಿರ್ವಹಿಸುವುದು.
3. ತಾಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳು ಸೂಚಿಸಿದ ಇನ್ನಿತರೆ ಕೆಲಸಕಾರ್ಯಗಳನ್ನು ನಿರ್ವಹಿಸುವುದು.

**3. ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು.**

ಇಲಾಖೆಯ ವ್ಯಾಪ್ತಿಯಲ್ಲಿ ಹಲವಾರು ಆರ್ಥಿಕ ಮತ್ತು ಶೈಕ್ಷಣಿಕ ಯೋಜನೆಗಳು ಇರುತ್ತವೆ. ವಿವಿಧ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ರೂಪಿಸಿರುವ ಸರ್ಕಾರದ ನೀತಿ ಹಾಗೂ ಆಡಳಿತ ಸುಧಾರಣೆಯ ವ್ಯತ್ಯಾಸಗಳನ್ನು ಪಾಲಿಸಿಕೊಂಡು ಬಂದಿದೆ.

1. ಕಛೇರಿಯಲ್ಲಿ ಸ್ವೀಕರಿಸುವ ಎಲ್ಲಾ ಕಾಗದ ಪತ್ರಗಲನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೊಂದಾಯಿಸಿ ಆ ದಿನವೇ ವಿಷಯ ನಿರ್ವಹಕರಿಗೆ ನೀಡುವಂತೆ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಆಗಿದ್ದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕ ಮೇಜು ತಪಾಸಣಾ ಕಾರ್ಯ.
3. ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶ ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು. ಹಾಗೂ ಅನುಷ್ಠಾನಗೊಳಿಸುವುದು.
4. ಎಲ್ಲಾ ಸರ್ಕಾರಿ ಇಲಾಖೆಗಳು, ನಿಗಮ, ಮಂಡಳಿಗಳು, ವಿಶ್ವವಿದ್ಯಾನಿಲಯಗಳು, ಅನುದಾನಿತ ಸಂಸ್ಥೆಗಳು ಸಹಕಾರಿ ಸಂಸ್ಥೆಗಳು, ಹಾಗೂ ಇತರೇ ಸರ್ಕಾರದ ಸಹಾಯ ಪಡೆಯುವ ಸಂಸ್ಥೆಗಳಲ್ಲಿ ಸರ್ಕಾರದ ಮೀಸಲಾತಿ ನೀತಿ ಪಾಲನೆಯಾಗಿರುವ ಬಗ್ಗೆ ಪರಿಶೀಲನೆ ಬ್ಯಾಕ್ ಲಾಗ್ ಹುದ್ದೆಗಳ ಗುರುತಿಸುವಿಕೆ ಇತ್ಯಾದಿ.
5. ತಾಲ್ಲೂಕಿನ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗಗಳ ಜಾತಿಗಳ ಬಗ್ಗೆ ನಿಗಾವಹಿಸಿ ದೃಷ್ಟಿ ಹರಿಸುವುದು.
6. ಜಾತಿ ಸಿಂಧುತ್ವ ಪ್ರಮಾಣ ಪತ್ರಗಳಿಗೆ ಸಂಬಂಧಿಸಿದಂತೆ ಜಿಲ್ಲಾ ಕಛೇರಿಗೆ ಜಾತಿ ಮತ್ತು ಆದಾಯ ಕುರಿತು ಪ್ರಾಥಮಿಕ ಪರಿಶೀಲನಾ ವರದಿಯನ್ನು ಸಲ್ಲಿಸುವುದು.

**4. ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದಂತೆ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಪುಸ್ತಕ, ಕಿರು ಹೊತ್ತಿಗೆ ಹಾಗೂ ವಾರ್ಷಿಕ ಕ್ರಿಯಾ ಯೋಜನೆಗಳು ಕಛೇರಿಯಲ್ಲಿ ಲಭ್ಯ.
2. ಕುಂದುಕೊರತೆ ನಿವಾರಣೆಗಾಗಿ ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಯವರನ್ನು ಸಂಪರ್ಕಿಸಬಹುದು.

**5. ಕಛೇರಿಯಲ್ಲಿ ಲಭ್ಯವಿರುವ ದಾಖಲೆಗಳ ವಿವರ:**

1. ಸರ್ಕಾರದ ಆದೇಶಗಳು
2. ಪ.ಜಾತಿ:ಪ.ವರ್ಗದ ಜನಸಂಖ್ಯೆ ಮಾಹಿತಿ
3. ಇಲಾಖಾ ಸಿಬ್ಬಂದಿ ವಿವರ

4. ಇಲಾಖಾ ಸಂಸ್ಥೆಗಳ ಮಾಹಿತಿ
5. ವಿದಾರ್ಥಿ ವೇತನ ನೀಡಿರುವ ಮಾಹಿತಿ
6. ನಿರುದ್ಯೋಗಿ ಪ.ಜಾತಿ:ಪ.ವರ್ಗದವರಿಗೆ ತರಬೇತಿ ನೀಡಿದ ಬಗ್ಗೆ ಮಾಹಿತಿ
7. ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆ-ಕುರಿತ ಮಾಹಿತಿ
8. ಸ್ಥಳೀಯ ಸಂಸ್ಥೆಗಳ ಶೇಕಡಾ 18ರ ಮಾಹಿತಿ
9. ಗ್ರಾಮ ಪಂಚಾಯತ್ ಶೇಕಡಾ 22.5ರ ಮಾಹಿತಿ
10. ವಸತಿ ಯೋಜನೆಗಳ ಮಾಹಿತಿ
11. ಅಂಬೇಡ್ಕರ್ ಭವನಗಳ ಮಾಹಿತಿ
12. ದೌಜನ್ಯದಲ್ಲಿನೊಂದ ಸಂಸ್ರಸ್ಥರಿಗೆ ಪರಿಹಾರ ಧನ ನೀಡಿದ ಬಗ್ಗೆ ಮಾಹಿತಿ
13. ಅಂತರ್‌ಜಾತಿ ವಿವಾಹವಾದವರಿಗೆ ಪ್ರೋತ್ಸಾಹ ಧನ ನೀಡಿದ ಕುರಿತು ಮಾಹಿತಿ
14. ಜಾತಿ ಪರಿಶೀಲನೆ ಮಾಡಿ ಸಿಂಧುತ್ವ ಪ್ರಮಾಣ ಪತ್ರ ನೀಡಿದ ಬಗ್ಗೆ ಮಾಹಿತಿ
15. ಇಲಾಖೆಗೆ ಬಿಡುಗಡೆಗೆ ಅನುದಾನ ಕುರಿತ ಮಾಹಿತಿ

**6. ಸಮಿತಿಗಳು**

1. ತಾಲ್ಲೂಕಾ ಮಟ್ಟದ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗಗಳ ಹಿತರಕ್ಷಣಾ ಸಮಿತಿ
2. ವಸತಿನಿಲಯಗಳ ಹಾಗೂ ವಸತಿ ಶಾಲೆಯ ವಿದ್ಯಾರ್ಥಿಗಳ ಪ್ರವೇಶಕ್ಕೆ ಆಯ್ಕೆ ಸಮಿತಿ

**7. 2005-06ನೇ ಸಾಲಿಗೆ ಇಲಾಖೆಗೆ ನಿಗದಿಪಡಿಸಿರುವ ಅನುದಾನ**

| | | | |
|---|---|---|---|
| 1. | ಪರಿಶಿಷ್ಟ ಜಾತಿ ಯೋಜನೆ | ರೂ. | 1,7000 |
| 2. | ಪರಿಶಿಷ್ಟ ಜಾತಿ ಯೋಜನೇತರ | ರೂ. | 16,3500 |
| 3. | ಪರಿಶಿಷ್ಟ ಜಾತಿ ವಿ.ಘ.ಯೋ | ರೂ. | 4,7575 |
| 4 | | **ಒಟ್ಟು ರೂ.** | **22,8075** |
| 5. | ಪರಿಶಿಷ್ಟ ವರ್ಗ ಯೋಜನೆ | ರೂ. | 0.03 |
| 6. | ಪರಿಶಿಷ್ಟ ವರ್ಗ ಯೋಜನೇತರ | - | - |
| 7. | ಪರಿಶಿಷ್ಟ ವರ್ಗ ಗಿ.ಉ.ಯೋ | - | - |
| 8. | | **ಒಟ್ಟು ರೂ.** | **0.03** |

**2005ರ ಮಾಹಿತಿ ಹಕ್ಕು ಕಾಯ್ದೆ**

2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕೇಂದ್ರ ಕಾಯ್ದೆ ನಂ:22) ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಅಶೋಕ ಕೆ.ಪವಾರ, ಪ್ರಥಮ ದರ್ಜೆ ಸಹಾಯಕರು ತಾಲ್ಲೂಕಾ ಸಮಾಜ ಕಲ್ಯಾಣಾಧಿಕಾರಿಯವರ ಕಾರ್ಯಾಲಯ, ಸಿದ್ದಾಪುರ ಇವರನ್ನು ಕಛೇರಿಗೆ ಸಂಬಂಧಿಸಿದಂತೆ ಸಾರ್ವಜನಿಕ ಮಾಹಿತಿ ಅಧಿಕಾರಿಯೆಂದು ನೇಮಕ ಮಾಡಲಾಗಿದೆ.

2005ರ ಮಾಹಿತಿ ಹಕ್ಕು ಅಧಿನಿಯಮ ಸೆಕ್ಷನ್ 5(2) ರ ಅಡಿಯಲ್ಲಿ ಈ ಕಛೇರಿಗೆ ಸಂಬಂಧಿಸಿದಂತೆ ಶ್ರೀಮತಿ ವೈಲೇಟ್ ಎಸ್. ಪಿಂಟೋ, ತಾಲ್ಲಾಕಾ ಸಮಾಜ ಕಲ್ಯಾಣಾಧಿಕಾರಿ ಕಚೇರಿ, ಸಿದ್ದಾಪುರ ಇವರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ನೇಮಕ ಮಾಡಲಾಗಿದೆ.

2005ರ ಮಾಹಿತಿ ಹಕ್ಕು ಕಾಯ್ದೆ 19 (1)ರ ಅಡಿಯಲ್ಲಿ ತಾಲ್ಲೂಕಿಗೆ ಸಂಬಂಧಪಟ್ಟಂತೆ ಶ್ರೀ ಪಿ.ಡಿ. ಗೋವಿಂದಪ್ಪ ತಾಲ್ಲೂಕಾ ಸಮಾಜ ಕಲ್ಯಾಣಾಧಿಕಾರಿ, ಸಿದ್ದಾಪುರ ಇವರನ್ನು ಸದರಿ ಅಧಿನಿಯಮದಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಮೇಲ್ಮನವಿ ಪ್ರಾಧಿಕಾರಿ ಎಂದು ನೇಮಕ ಮಾಡಲಾಗಿದೆ.

ಪಿ.ಆರ್. 91 — ತಾಲ್ಲೂಕಾ ಸಮಾಜ ಕಲ್ಯಾಣಾಧಿಕಾರಿ, ಸಿದ್ದಾಪುರ (ಉ.ಕ.)

**PROCEEDINGS OF THE PRL. DISTRICT & SESSIONS COURT BIDAR**

**Order No. 05/2006, Bidar, Dated: 6th January, 2006**

**Subject:** Sanction of Commuted leave for 5 days from 19.12.05 to 23.12.2005 (b.d.i.) to Sri Lakshminarasimah Murthy, Chief Administrative Officer, District and Sessions Court, Bidar, on private affairs, with permission to prefix and suffix holidays on 18.12.2005, 24.12.2005 and 25.12.2005.

**Read:**
1. The Accountant General, (A & E), Karnataka, Bangalore, letter No. GE-13/J5/ 2005-2006/888, dated 27.12.2005, regarding certifying of Commuted leave title.
2. Office Note, dated 13.12.2005 and 6.1.2006, and orders passed thereon.

Sri Lakshminarasimha Murthy, Chief Administrative Officer, of this court, is hereby sanctioned commuted leave for 5 days with effect from 19.12.2005 to 23.12.2005 (b.d.i.) with permission to prefix and suffix holidays on 18.12.2005. 24.12.2005 and 25.12.2005, on private affairs.

Sri Lakshminarasimha Murthy, Chief Administrative Officer, District and Sessions Court, Bidar, is reposted to the same post on expiry of leave.

Sri S.M.M. Quadri, Serishtedar, of this Court, has been placed in additional charge of the above said Officer, during the above leave period.

**KARANAPPA RASTAPUR**
Prl. District and Sessions Judge, Bidar.

P.R. 102